## ವಿಷ್ಣು , ವೈಷ್ಣವ ಪ್ರಶಂಸೆ

ಅಧ್ಯಾಯ-೧೧

ಶೌನಕ— ಆ ಬ್ರಾಹ್ಮಣ ಪತ್ನಿಯನ್ನು ಪರಿತ್ಯಾಗ ಮಾಡಿ ಮುಂದೇನು ಮಾಡಿದ ? ಅಶ್ವಿನೀ ಕುಮಾರರು ಯಾರ ವಂಶದಲ್ಲಿ ಹುಟ್ಟಿದರು ?

ಸೌತಿ— ಆ ಬ್ರಾಹ್ಮಣ ಭಾರದ್ವಾಜ ಗೋತ್ರದ ಒಬ್ಬ ಮಹಾಮುನಿ. ಸುತಪಾ ಎಂದೇ ಹೆಸರು. ಆತ ಲಕ್ಷ ವರ್ಷಕಾಲ ಹಿಮಾಲಯದಲ್ಲಿ ತಪಸ್ಸು ಮಾಡಿದ. ಬ್ರಹ್ಮವರ್ಚಸ್ಸಿನಿಂದ ಪ್ರಜ್ವಲಿಸಿದ. ಒಮ್ಮೆ ಇದ್ದಕ್ಕಿದ್ದಂತೆ ಆಕಾಶದಲ್ಲಿ ಕ್ಷಣಕಾಲ ಕೃಷ್ಣಜ್ಯೋತಿಯನ್ನು ಕಂಡ. ಪ್ರಕೃತಿಯಿಂದಾಚೆ ನಿರ್ಲಿಪ್ತನಾಗಿರುವ ಆ ಪರಮಾತ್ಮನೆ ಮೈದೋರಿದರೂ ಆತ ಮೋಕ್ಷವರವನ್ನು ಬೇಡಲಿಲ್ಲ. ನಿಶ್ಚಲಭಕ್ತಿ ಬೇಡಿದ, ದಾಸ್ಯ ಬೇಡಿದ. ಆಗ ಆಕಾಶವಾಣಿಯಾಯಿತು. 'ಮೊದಲಿಗೆ ಪತ್ನಿಯನ್ನು ಪರಿಗ್ರಹಿಸು. ಪ್ರಾರಬ್ಧ ಭೋಗಿಸಿ ಕಳೆದುಕೊಳ್ಳು, ಬಳಿಕ ನಿನಗೆ ಭಕ್ತಿ ದಾಸ್ಯ ನೀಡುತ್ತೇನೆ.'

ಬ್ರಹ್ಮನು ಆತನಿಗೆ ಪಿತೃಗಳ ಮಾನಸ ಪುತ್ರಿಯನ್ನಿತ್ತ. ಅವಳಲ್ಲಿ ಕಲ್ಯಾಣ ಮಿತ್ರ ಜನಿಸಿದ. ಅವನ ಸ್ಮರಣಮಾತ್ರದಿಂದ ಕಲಿಬಾಧೆ ನಿವೃತ್ತಿಯಾಗುವುದು. ಅಗಲಿದ ಬಂಧುಗಳು ಪುನಃ ಲಭಿಸುತ್ತಾರೆ. ಮುನಿ ಕಲ್ಯಾಣಮಿತ್ರನ ತಾಯಿಯನ್ನೂ ಪರಿತ್ಯಜಿಸಿ ಅಶ್ವಿನಿ ಕುಮಾರನನ್ನು ಶಪಿಸಿದ- ''ನಿನಗೆ ಯಜ್ಞದಲ್ಲಿ ಹವಿರ್ಭಾಗವಿಲ್ಲದಿರಲಿ. ನಿನ್ನ ಸೋದರನ ಜೊತೆಗೇ ನಿನಗೆ ಪೂಜೆ ಹೊರತು ಪ್ರತ್ಯೇಕ ಪೂಜೆ ಇಲ್ಲವೆಂದಾಗಲಿ. ವ್ಯಾಧಿಗ್ರಸ್ತನಾಗು. ನಿನ್ನ ಅಂಗಗಳು ನಿಷ್ಕ್ರಿಯವಾಗಲಿ'' ಒಡನೆ ಸೂರ್ಯ ಅಶ್ವಿನೀ ಕುಮಾರನೊಂದಿಗೆ ಸುತಪನ ಬಳಿ ಬಂದು ಸ್ತುತಿಸಿದ-

''ಪೂಜ್ಯ ವಿಪ್ರನೆ ಕ್ಷಮಿಸು. ನನ್ನ ಮಗ ಮಾಡಿದ ತಪ್ಪನ್ನು ಕ್ಷಮಿಸು. ಬ್ರಹ್ಮ ವಿಷ್ಣು ಮಹೇಶ್ವರ ಮುಂತಾದ ದೇವತೆಗಳೆಲ್ಲ ಸದಾ ವಿಪ್ರನು ನೀಡುವ ಫಲಪುಷ್ಪ ಜಲಾದಿಗಳನ್ನೆ ಸ್ವೀಕರಿಸುತ್ತಾರೆ. ವಿಪ್ರ ಆವಾಹಿಸಿದ ದೇವತೆಗಳನ್ನೆ ಜಗತ್ತಿನಲ್ಲಿ ಎಲ್ಲರೂ ಪೂಜಿಸುತ್ತಾರೆ. ಆದರಿಂದ ವಿಪ್ರನಿಗಿಂತ ಬೇರೆ ದೇವತೆಯಿಲ್ಲ. ಸ್ವಯಂ ಹರಿಯೆ ವಿಪ್ರರೂಪಿ. ವಿಪ್ರ ಸಂತುಷ್ಟನಾದರೆ ನಾರಾಯಣ ಸಂತುಷ್ಟನಾಗುತ್ತಾನೆ. ನಾರಾಯಣ ಸಂತುಷ್ಟನಾದರೆ ಎಲ್ಲ ದೇವತೆಗಳು ಸಂತುಷ್ಟರಾಗುತ್ತಾರೆ.

**ನಾಸ್ತಿ ಗಂಗಾಸಮಂ ತೀರ್ಥಂ ನ ಚ ಕೃಷ್ಣಾತ್ ಪರಃ ಸುರಃ ।**
**ನ ಶಂಕರಾತ್ ವೈಷ್ಣವಶ್ಚ ನ ಸಹಿಷ್ಣುರ್ಧರಾಪರಾ ॥**

ಗಂಗೆಗೆ ಸಮಾನ ತೀರ್ಥವಿಲ್ಲ. ಕೃಷ್ಣನನ್ನು ಮೀರಿಸುವ ದೇವತೆಯಿಲ್ಲ. ಶಂಕರನಿಗಿಂತ ಹೆಚ್ಚಿನ ವಿಷ್ಣುಭಕ್ತನಿಲ್ಲ. ಧರೆಗಿಂತ ಮೇಲಾದ ಕ್ಷಮಾಶೀಲನಿಲ್ಲ.

**ನ ಚ ಸತ್ಯಾತ್ ಪರೋ ಧರ್ಮೋ ನ ಸಾಧ್ವೀ ಪಾರ್ವತೀಪರಾ ।**
**ನ ದೈವಾದ್ ಬಲವಾನ್ ಕಶ್ಚಿತ್ ನ ಚ ಪುತ್ರಾತ್ ಪರಃ ಪ್ರಿಯಃ ॥**

ಸತ್ಯಕ್ಕಿಂತ ಮಿಗಿಲಾದ ಧರ್ಮವಿಲ್ಲ. ಪಾರ್ವತಿಗಿಂತ ಮಿಗಿಲಾದ ಪತಿವ್ರತೆಯಿಲ್ಲ. ದೈವಕ್ಕಿಂತ ಪ್ರಬಲವಾದುದು ಬೇರೆ ಇಲ್ಲ. ಪುತ್ರನಿಗಿಂತ ಹೆಚ್ಚಿನ ಪ್ರೀತಿಪಾತ್ರನಿಲ್ಲ.

**ನಚ ವ್ಯಾಧಿಸಮಃ ಶತ್ರುರ್ನಚ ಪೂಜ್ಯೋ ಗುರೋಃ ಪರಃ ।**
**ನಾಸ್ತಿ ಮಾತೃಸಮೋ ಬಂಧುಃ ನ ಚ ಮಿತ್ರಂ ಪಿತುಃ ಪರಂ ॥**

ವ್ಯಾಧಿಗೆ ಸಮಾನ ಶತ್ರುವಿಲ್ಲ. ಗುರುವಿಗಿಂತ ಹೆಚ್ಚಿನ ಪೂಜ್ಯನಿಲ್ಲ. ತಾಯಿಗೆ ಸಮಾನ ಬಂಧು ಇಲ್ಲ. ತಂದೆಗೆ ಅಧಿಕ ಮಿತ್ರನಿಲ್ಲ.

**ಏಕಾದಶೀ ವ್ರತಾನ್ನಾನ್ಯತ್ ತಪೋ ನಾನಶನಾತ್ ಪರಂ ।**
**ಪರಂ ಸರ್ವಧನಾದ್ ರತ್ನಂ ವಿದ್ಯಾರತ್ನಂ ಪರಂ ತತಃ ॥**

ಏಕಾದಶೀ ವ್ರತಕ್ಕಿಂತ ಮಿಗಿಲಾದ ವ್ರತವಿಲ್ಲ. ಉಪವಾಸಕ್ಕಿಂತ ಮಿಗಿಲಾದ ತಪವಿಲ್ಲ. ಎಲ್ಲ ಧನಕ್ಕಿಂತ ರತ್ನ ಶ್ರೇಷ್ಠ. ಎಲ್ಲ ರತ್ನಕ್ಕಿಂತ ವಿದ್ಯಾರತ್ನ ಶ್ರೇಷ್ಠ.

ಎಲ್ಲ ಆಶ್ರಮಗಳಲ್ಲಿಯೂ ವಿಪ್ರಶ್ರೇಷ್ಠ. ವಿಪ್ರನಿಗೆ ಸಮನಾದ ವೇದ ವೇದಾಂಗಜ್ಞನಾದ ಗುರುವಿಲ್ಲ ಎಂದು ಪ್ರಜಾಪತಿ ವಚನವಿದೆ.'

ಸೂರ್ಯನ ಪ್ರಾರ್ಥನೆಗೆ ಮುನಿದು ಸುತಪ ತನ್ನ ತಪೋಬಲದಿಂದ ಅಶ್ವಿನಿ ಕುಮಾರನನ್ನು ನೀರೋಗಿಗಳನ್ನಾಗಿಸಿ ಯಜ್ಞದಲ್ಲಿ ಹವಿರ್ಭಾಗ ಅವನಿಗೆ ಸಿಗುವಂತೆ ವರ ನೀಡಿ ಹರಿಸೇವಾಪರನಾಗಿ ಗಂಗಾ ತೀರಕ್ಕೆ ತೆರಳಿದ. ಸೂರ್ಯನೂ ಪುತ್ರ-ನೊಂದಿಗೆ ಹಿಂತೆರಳಿದ.

ಸೂರ್ಯ ಮಾಡಿದ ವಿಪ್ರಸ್ತುತಿಯನ್ನು ಯಾವನು ಪಠಿಸುವನೋ ಅವನು ವಿಪ್ರಾನುಗ್ರಹದಿಂದ ಸರ್ವತ್ರ ವಿಜಯಿಯಾಗುತ್ತಾನೆ. ಬೆಳಿಗ್ಗೆ ಎದ್ದು 'ವಿಪ್ರನಿಗೆ ನಮಸ್ಕಾರ' ಎನ್ನುವವ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದಂತಾಗುವುದು. ಎಲ್ಲಯಜ್ಞ ಮಾಡಿದ ಫಲ ಬರುವುದು.

**ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।**
**ಸಾಗರೇ ಯಾನಿ ತೀರ್ಥಾನಿ ವಿಪ್ರಪಾದೇಷು ತಾನಿ ಚ ॥**

ಭೂಮಿಯಲ್ಲಿರುವ ಎಲ್ಲ ತೀರ್ಥಗಳೂ ಸಮುದ್ರದಲ್ಲಿವೆ. ಹಾಗೇ ಸಮುದ್ರದಲ್ಲಿರುವ ಎಲ್ಲ ತೀರ್ಥಗಳೂ ವಿಪ್ರರ ಪಾದಗಳಲ್ಲಿವೆ.

**ವಿಪ್ರಪಾದೋದಕಂ ಪೀತ್ವಾ ಯಾವತ್ತಿಷ್ಠತಿ ಮೇದಿನೀ ।**
**ತಾವತ್ ಪುಷ್ಕರ ಪಾತ್ರೇಷು ಪಿಬಂತಿ ಪಿತರೋ ಜಲಂ ॥**

**ವಿಪ್ರಪಾದೋದಕಂ ಪುಣ್ಯಂ ಭಕ್ತಿಯುಕ್ತಶ್ಚ ಯಃ ಪಿಬೇತ್ ।**
**ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ॥**

**ಮಹಾರೋಗೀ ಯದಿ ಪಿಬೇತ್ ವಿಪ್ರಪಾದೋದಕಂ ದ್ವಿಜ ।**
**ಮುಚ್ಯತೇ ಸರ್ವರೋಗಾಚ್ಚ ಮಾಸಮೇಕಂ ತು ಭಕ್ತಿತಃ ॥**

ವಿಪ್ರ ಪಾದೋದಕ ಪಾನ ಮಾಡಿದರೆ ಭೂಮಿ ಇರುವಷ್ಟು ಕಾಲವೂ ಪಿತೃಗಳು ಕಮಲದೆಲೆಯ ಪಾತ್ರೆಯಲ್ಲಿ ನೀರು ಕುಡಿಯುವರು. ಪವಿತ್ರವಾದ ವಿಪ್ರ-ಪಾದೋದಕವನ್ನು ಭಕ್ತಿಯಿಂದ ಕುಡಿವವನು ಎಲ್ಲ ತೀರ್ಥಸ್ನಾನ ಮಾಡಿದಂತಾಗುತ್ತದೆ. ಎಲ್ಲ ಯಜ್ಞ ಮಾಡಿದ ಫಲ ಬರುತ್ತದೆ. ಮಹಾರೋಗ ಪೀಡಿತನಾದವನು ಒಂದು ತಿಂಗಳ ಕಾಲ ಭಕ್ತಿಯಿಂದ ವಿಪ್ರಪಾದೋದಕ ಪಾನ ಮಾಡಿದರೆ ಸರ್ವರೋಗಗಳಿಂದ ಮುಕ್ತನಾಗುವನು.

ವಿಷ್ಣುಭಕ್ತನೂ ಸಂಧ್ಯಾವಂದನೆಯಿಂದ ಪೂತಾತ್ಮನೂ ಆದ ವಿಪ್ರನು ಲೌಕಿಕ ವಿದ್ಯೆಯಲ್ಲಿ ನಿಪುಣನಿರಲಿ ಇಲ್ಲದಿರಲಿ ವಿಷ್ಣುವಿನಂತೆ ಪೂಜ್ಯನೆನಿಸುತ್ತಾನೆ. ವಿಷ್ಣು-ಭಕ್ತನಾದ ವಿಪ್ರ ಹೊಡೆದರೂ ಪ್ರತಿಯಾಗಿ ಹೊಡೆಯಬಾರದು. ಶಪಿಸಿದರೂ ಪ್ರತಿಶಾಪ ನೀಡಬಾರದು. ಗೋವುಗಳಿಗಿಂತ ನೂರು ಪಟ್ಟು ಹೆಚ್ಚು ಪೂಜ್ಯ ವಿಪ್ರ. ವಿಪ್ರನ ಪಾದೋದಕವನ್ನೂ ನೈವೇದ್ಯವನ್ನೂ ಸೇವಿಸುವವನು ರಾಜಸೂಯಯಾಗದ ಫಲವನ್ನು ಪಡೆಯುತ್ತಾನೆ.

**ಏಕಾದಶ್ಯಾಂ ನ ಭುಂಕ್ತೇ ಯೋ ನಿತ್ಯಂ ಕೃಷ್ಣಂ ಸಮರ್ಚಯೇತ್ ।**
**ತಸ್ಯ ಪಾದೋದಕಂ ಪ್ರಾಪ್ಯ ಸ್ಥಲಂ ತೀರ್ಥಂ ಭವೇದ್ಧ್ರುವಂ ॥**

ಏಕಾದಶಿ ಉಪವಾಸ ನಿತ್ಯ ಕೃಷ್ಣೇನ ಅರ್ಚನೆಗಳನ್ನು ಮಾಡುವವನ ಪಾದೋದಕ ಬಿದ್ದ ಸ್ಥಲವೆ ತೀರ್ಥವೆನಿಸುವುದು ನಿಶ್ಚಿತ.

ಕೃಷ್ಣನ ನೈವೇದ್ಯ ಉಣ್ಣುವವ ಪೂತಾತ್ಮನಾಗಿ ಜೀವನ್ಮುಕ್ತನೆನಿಸುತ್ತಾನೆ. ಸತ್ಕುಲ ಪ್ರಸೂತರಾದ ದ್ವಿಜರಿಗೆ ವಿಷ್ಣುವಿಗೆ ಅನಿವೇದಿತನಾದ ಅನ್ನವೆಂದರೆ ಅದು ಮಲಕ್ಕೆ ಸಮಾನ. ನೀರು ಮೂತ್ರಕ್ಕೆ ಸಮಾನವೆಂದು ಪ್ರಜಾಪತಿ ವಚನವಿದೆ. ಬ್ರಹ್ಮನೂ ಬ್ರಹ್ಮಪುತ್ರರೂ ಎಲ್ಲರೂ ವಿಷ್ಣುಭಕ್ತರು. ವಿಪ್ರ ಅವರ ಕುಲದಲ್ಲಿ ಹುಟ್ಟಿದವನೆಂದ ಮೇಲೆ ಅವನು ವಿಷ್ಣುವಿಗೆ ವಿಮುಖ ಹೇಗಾದಾನು ? ಒಂದು ವೇಳೆ ತಂದೆ ತಾಯಿಗಳ ತಾತಂದಿರ ಅಥವಾ ಹಿರಿಯರ ಸಂಸರ್ಗದೋಷದಿಂದಾಗಿ ವಿಷ್ಣುವಿಮುಖನಾದರೆ ಅವನು ಬದುಕಿದ್ದು ಸತ್ತಂತೆಯೆ.

**ಸ ಕಿಂ ಗುರುಃ ಸ ಕಿಂ ತಾತಃ ಸ ಕಿಂ ಪುತ್ರಃ ಸ ಕಿಂ ಸಖಾ ।**
**ಸ ಕಿಂ ರಾಜಾ ಸ ಕಿಂ ಬಂಧುರ್ನ ದದ್ಯಾತ್ ಯೋ ಹರೌ ಮತಿಂ ॥**

ತಾನು ಹರಿಭಕ್ತನಾಗಿ ಪರರಿಗೆ ಭಕ್ತಿ ಉಪದೇಶಿಸಿದವ ಗುರುವೆ, ತಾತನೆ, ಮಗನೆ, ಮಿತ್ರನೆ, ರಾಜನೆ, ಬಂಧುವೆ ?

**ಅವೈಷ್ಣವಾದ್ ದ್ವಿಜಾದ್ ವಿಪ್ರ ಚಂಡಾಲೋ ವೈಷ್ಣವೋ ವರಃ ।**
**ಸಗಣಃ ಶ್ವಪಶೋ ಮುಕ್ತೋ ಬ್ರಾಹ್ಮಣೋ ನರಕಂ ವ್ರಜೇತ್ ॥**

ವಿಷ್ಣುಭಕ್ತಿರಹಿತನಾದ ದ್ವಿಜನಿಗಿಂತ ವಿಷ್ಣುಭಕ್ತನಾದ ಚಂಡಾಲನೆ ಲೇಸು. ಏಕೆಂದರೆ ಆ ಚಂಡಾಲ ಸಪರಿವಾರನಾಗಿ ಮುಕ್ತನಾಗುತ್ತಾನೆ, ದ್ವಿಜ ನರಕಕ್ಕೆ ಹೋಗುತ್ತಾನೆ.

**ಸಂಧ್ಯಾಹೀನೋಽ ಶುಚಿರ್ನಿತ್ಯಂ ಕೃಷ್ಣೇ ವಾ ವಿಮುಖೋ ದ್ವಿಜಃ ।**
**ಸ ಏವ ಬ್ರಾಹ್ಮಣಾಭಾಸೋ ವಿಷ ಹೀನೋ ಯಥೋರಗಃ ॥**

ಸಂಧ್ಯಾವಂದನೆ ಮಾಡದ ದ್ವಿಜನಿಗೂ ವಿಷ್ಣು ವಿಮುಖನಾದ ದ್ವಿಜನಿಗೂ ಸದಾ ಅಶೌಚ. ಆತ ತೋರಿಕೆಗೆ ಮಾತ್ರ ದ್ವಿಜ, ವಿಷವಿಲ್ಲದ ಹಾವಿನಂತೆ. ಗುರುಮುಖದಿಂದ ಯಾರ ಕಿವಿಗೆ ವಿಷ್ಣುಮಂತ್ರ ಬೀಳುವುದೋ ಅವನು ವಿಷ್ಣುಭಕ್ತನಾಗಿ ಪೂತಾತ್ಮ-ನೆನಿಸುತ್ತಾನೆ. ಜೀವನ್ಮುಕ್ತನೆನಿಸುತ್ತಾನೆ. ವಿಷ್ಣುಭಕ್ತ ತನ್ನ ತಾತ ಮುತ್ತಾತ ಮುಂತಾದ ನೂರಾರು ಕೋಟಿ ಪಿತೃಗಳೊಂದಿಗೆ ವಿಷ್ಣುಲೋಕ ಸೇರುತ್ತಾನೆ.

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ನಾಲ್ಕು ಜಾತಿಗಳಂತೆ ವೈಷ್ಣವ ಎಂಬುದೂ ಒಂದು ಬೇರೆ ಜಾತಿ. ವಿಷ್ಣುಭಕ್ತರು ಸದಾ ವಿಷ್ಣುವಿನ ಪಾದಕಮಲವನ್ನು ಸ್ಮರಿಸುತ್ತಾರೆ. ಅವರನ್ನು ವಿಷ್ಣು ಸ್ಮರಿಸುತ್ತಾನೆ. ಅವರ ರಕ್ಷಣೆಗಾಗಿ ವಿಷ್ಣು ಸುದರ್ಶನ ಚಕ್ರವನ್ನು ನೇಮಿಸಿದ್ದರೂ ಅಷ್ಟರಿಂದಲೆ ನಿಶ್ಚಿಂತನಾಗದೆ ತಾನೆ ಆ ಭಕ್ತರ ಬಳಿ ಇರುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ವಿಷ್ಣು ವೈಷ್ಣವ ಬ್ರಾಹ್ಮಣ ಪ್ರಶಂಸೆಯೆಂಬ ಹನ್ನೊಂದನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೧೨

## ನಾರದ ಜನ್ಮಕಥನ

ಶೌನಕ— ಋಷಿವಂಶ ವರ್ಣನೆಯ ಪ್ರಸಂಗದಲ್ಲಿ ಬೇರೆ ಬೇರೆ ವಿಷಯಗಳು ಬಂದಿವೆ. ಈಗ ಬ್ರಹ್ಮ ನಾರದನಿಗೆ ಶಾಪ ಕೊಟ್ಟ ಬಳಿಕ ಏನಾಯಿತೆಂದು ಕೇಳಲು ಈಗ ಕುತೂಹಲ ಉಂಟಾಗಿದೆ. ಬ್ರಹ್ಮಪುತ್ರರಲ್ಲಿ ಯಾರು ಸೃಷ್ಟಿಕಾರ್ಯ ಮಾಡಿದರು, ಯಾರು ಬ್ರಹ್ಮಚರ್ಯದಿಂದಿದ್ದರು ? ತಂದೆಯನ್ನು ವಿರೋಧಿಸಿದ ನಾರದ ಮುಂದೇನು ಮಾಡಿದ ? ತಂದೆಯ ಶಾಪದಿಂದ ಅವನಿಗೇನು ಪರಿಣಾಮ-ವಾಯಿತು ? ಅವನ ಶಾಪದಿಂದ ತಂದೆಗೇನಾಯಿತು ? ಇವೆಲ್ಲವನ್ನೂ ಹೇಳು.

ಸೌತಿ— ಹಂಸ ಯತಿ ಅರಣಿ ವೋಢು ಪಂಚಶಿಖ ಅಪಾಂತರತಮ ಸನಕಾದಿಗಳು ಇವರ ಹೊರತು ಬೇರೆ ಬ್ರಹ್ಮಪುತ್ರರು ಅನೇಕ ಮಂದಿ ಬ್ರಹ್ಮನ ಆಜ್ಞೆಯನ್ನು ಪಾಲಿಸಿ ಸಂಸಾರವಂದಿಗರಾದರು. ಮಕ್ಕಳನ್ನು ಪಡೆದರು.

ನಾರದನ ಶಾಪದಿಂದ ಬ್ರಹ್ಮ ಲೋಕದಲ್ಲಿ ಪೂಜೆ ಇಲ್ಲದವನಾದ. ಅದರಿಂದಲೆ ಬಲ್ಲವರು ಬ್ರಹ್ಮಮಂತ್ರವನ್ನು ಉಪಾಸನ ಮಾಡುವುದಿಲ್ಲ. ನಾರದನೂ ಬ್ರಹ್ಮಶಾಪ-ದಿಂದ ಗಂಧರ್ವನಾಗಿ ಹುಟ್ಟಿದ. ಆ ವೃತ್ತಾಂತವನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು.

ಒಬ್ಬ ಗಂಧರ್ವರಾಜ ಎಲ್ಲ ಬಗೆಯ ಐಶ್ವರ್ಯವಿದ್ದೂ ಪುತ್ರಹೀನನಾಗಿದ್ದ. ಪುತ್ರಾರ್ಥಿಯಾಗಿ ಗುರು ವಸಿಷ್ಠರ ಉಪದೇಶದಂತೆ ಪುಷ್ಕರ ಕ್ಷೇತ್ರದಲ್ಲಿ ಶಿವನ ಕುರಿತು ಏಕಾಗ್ರತೆಯಿಂದ ತಪಸ್ಸು ಮಾಡಿದ. ವಸಿಷ್ಠರು ಅವನಿಗೆ ಶಿವ ಕವಚ ಸ್ತೋತ್ರ ಹಾಗೂ ದ್ವಾದಶಾಕ್ಷರ ಮಂತ್ರಗಳನ್ನು ಉಪದೇಶಿಸಿದರು. ಆತ ನಿರಾಹಾರನಾಗಿ ದೇವಮಾನದ ನೂರು ವರ್ಷಕಾಲ ಆ ಮಂತ್ರ ಜಪಿಸಿದ. ಕೊನೆಯಲ್ಲಿ ಶಿವ ಮೈದೋರಿದ. ಪ್ರಸನ್ನ ಮುಖದಿಂದ ಬ್ರಹ್ಮವರ್ಚಸ್ಸಿನಿಂದ ದಶದಿಕ್ಕುಗಳನ್ನು ಬೆಳಗಿಸುತ್ತ ನಿಂತ. ತ್ರಿಶೂಲ ಪಟ್ಟಿಶಧಾರಿ. ದಿಗಂಬರ, ವೃಷಭವಾಹನ, ಶುದ್ಧ ಸ್ಫಟಿಕದಂತೆ ಹೊಳೆವ ಮೈಬಣ್ಣದವ. ಚಂದ್ರಶೇಖರ, ತ್ರಿಣೇತ್ರ, ಚಿನ್ನದಂತೆ ಹೊಳೆವ ಜಟಾಜೂಟದವ. ನೀಲಕಂಠ, ಸರ್ಪವನ್ನೆ ಯಜ್ಞೋಪವೀತವಾಗಿ ಧರಿಸಿದವ, ಸರ್ವಸಂಹಾರಕ ಮೃತ್ಯುಂಜಯ ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಿಗಿಂತ ಕೋಟಿಪಾಲು ಬೆಳಗುವವ. ತತ್ವಜ್ಞಾನ-ದಾಯಕ ಹರಿಭಕ್ತಿಯನ್ನು ಮುಕ್ತಿಯನ್ನೂ ಕೊಡುವವ. ಇಂಥ ಶಿವನನ್ನು ಕಂಡ ಗಂಧರ್ವರಾಜ ದಂಡ ಪ್ರಣಾಮ ಮಾಡಿ ವಸಿಷ್ಠರು ಉಪದೇಶಿಸಿದ್ದ ಮಂತ್ರದಿಂದ ಸ್ತುತಿಸಿದ. ಬೇಕಾದ ವರ ಕೇಳೆಂದ ಕೃಪಾನಿಧಿ ಶಿವ. ಗಂಧರ್ವರಾಜ ಪರಮ ವೈಷ್ಣವ-ನಾದ ಒಬ್ಬ ಮಗನನ್ನು ಬೇಡಿದ. ಶಿವ ನಕ್ಕು ಹೇಳಿದ-

ಗಂಧರ್ವರಾಜ, ನೀನು ಧನ್ಯ. ಈ ಒಂದು ವರವಿದ್ದರೆ ಸಾಕು. ಬೇರೆ ಎಲ್ಲ ಚರ್ವಿತಚರ್ವಣ. ಹರಿಯಲ್ಲಿ ದೃಢಭಕ್ತಿ ಉಳ್ಳವ ಅನಾಯಾಸವಾಗಿ ಸಕಲ ಪ್ರಪಂಚ-ವನ್ನಾಳಬಲ್ಲ. ತನ್ನ ಮತ್ತು ಮಾತಾಮಹನ ಕುಲಕೋಟಿಯನ್ನುದ್ಧರಿಸಿ ಗೋಲೋಕಕ್ಕೆ ಹೋಗಬಲ್ಲ. ಕೋಟಿ ಜನ್ಮಾರ್ಜಿತವಾದ ಸಂಚಿತ ಆಗಾಮಿ ಪ್ರಾರಬ್ಧವೆಂಬ ತ್ರಿವಿಧ ಪಾಪವನ್ನೂ ಅನಿಷ್ಟ ಪುಣ್ಯವನ್ನೂ ಕಳೆದುಕೊಂಡು ಮೋಕ್ಷದಲ್ಲಿ ಹರಿಯ ದಾಸ್ಯವನ್ನು ಪಡೆಯಬಲ್ಲ.

ಸತಿ ಸುತರು ಐಶ್ವರ್ಯ ಸುಖ ದುಃಖಾನುಭವವೆಲ್ಲ ಮಾನವನಿಗೆ ಕೃಷ್ಣಭಕ್ತಿ ಮನದಲ್ಲಿ ಮೂಡುವ ವರೆಗೆ ಮಾತ್ರ. ಅದು ಮೂಡಿತೆಂದರೆ ಎಲ್ಲ ಕಾಮನೆಗಳೂ ಬತ್ತಿಹೋಗುವುವು. ಭಕ್ತಿ ಎಂಬ ಖಡ್ಗ ಕಾಮನೆಯೆಂಬ ವೃಕ್ಷದ ಬೇರನ್ನೆ ಕಡಿದೊಗೆಯ ಬಲ್ಲುದು.

ಕೃಷ್ಣಭಕ್ತರೆ ಪುಣ್ಯವಂತರು. ಅವರಿಗೆ ಪರಮ ವೈಷ್ಣವರಾದ ಮಕ್ಕಳು ಹುಟ್ಟಿ ಅನಾಯಾಸವಾಗಿ ಕುಲಕೋಟಿಯನ್ನು ಉದ್ಧರಿಸುತ್ತಾರೆ. ಆದರಿಂದ ವೈಷ್ಣವ ಪುತ್ರನೊಬ್ಬ ಜನಿಸಬೇಕೆಂಬ ಒಂದು ವರದಿಂದಲೆ ಮಾನವ ಕೃತಾರ್ಥನೆನಿಸುತ್ತಾನೆ. ಬೇರೆ ವರವೇಕೆ ಬೇಕು ?

ವೈಷ್ಣವರಾದ ನಮಗೆ ಶ್ರೀಕೃಷ್ಣನ ಭಕ್ತಿ ದಾಸ್ಯಗಳೆಂಬುದು ಒಂದು ದೊಡ್ಡ ನಿಧಿ. ಅದನ್ನು ನಾವು ಯಾರಿಗೂ ಕೊಡಲು ಸಿದ್ಧರಿಲ್ಲ. ದುರ್ಲಭವಾದ ಬೇರಾವ ವರವನ್ನಾದರೂ ಕೇಳು. ಇಂದ್ರ ಪದವಿ ಬೇಕೆ ? ದೇವ ಜನ್ಮಬೇಕೆ ಅಥವಾ ಬ್ರಹ್ಮಪದವಿಯೆ ಬೇಕೆ ? ಅಥವಾ ಸರ್ವಸಿದ್ಧಿದಾಯಕವಾದ ಮಹಾಯೋಗ ಜ್ಞಾನವನ್ನಾಗಲಿ ಮೃತ್ಯುಜಯವನ್ನಾಗಲಿ ಸುಲಭವಾಗಿ ಕೊಡಬಲ್ಲೆ. ಹರಿದಾಸತನ ಒಂದನ್ನು ಬಿಡು.'

ಶಿವನ ಮಾತು ಕೇಳಿದಾಗ ಗಂಧರ್ವರಾಜನಿಗೆ ಗಂಟಲು ಒಣಗಿತು. ಸರ್ವ ಸಂಪದ್ದಾಯಕನಾದ ಶಿವನ ಮುಂದೆ ದೀನನಾಗಿ ಹೇಳಿದ.

'ಶಿವನೆ, ಹರಿಯು ಕಣ್ಣರೆಪ್ಪೆ ಮುಚ್ಚಿದೊಡನೆ ಬ್ರಹ್ಮಪದವಿ ನಾಶ ಹೊಂದುತ್ತಿರುವಾಗ ಸ್ವಪ್ನದಂತೆ ಅಶಾಶ್ವತವಾದ ಆ ಪದವಿಯನ್ನು ಕೃಷ್ಣಭಕ್ತನೇಕೆ ಬಯಸುವ ? ಇನ್ನು ಇಂದ್ರಪದವಿ ದೇವಜನ್ಮ, ಯೋಗಸಿದ್ಧಿ, ಮೃತ್ಯುಜಯ ಮುಂತಾದುವೆಲ್ಲ ಭಕ್ತನಿಗೆ ಇಷ್ಟವೆನಿಸೀತೆ ?

ವಿಷ್ಣುಭಕ್ತರು ಸಾಲೋಕ್ಯ ಸಾಷ್ಟಿಕ ಸಾಮೀಪ್ಯ ಸಾಯುಜ್ಯ ಮೋಕ್ಷಗಳನ್ನೂ ಬಯಸಲಾರರು. ಸ್ವಪ್ನದಲ್ಲಾಗಲಿ ಜಾಗರದಲ್ಲಾಗಲಿ ಅವರು ದುರ್ಲಭವಾದ ದೃಢ ಭಕ್ತಿಯೊಂದನ್ನೇ ಬಯಸುವರು.

ಆದರಿಂದ ವೈಷ್ಣವ ಪುತ್ರನೆಂಬ ವರವನ್ನು ನೀಡು. ನೀನು ಬೇಡುವವರಿಗೆ ಕಲ್ಪವೃಕ್ಷ. ಆದರೂ ನೀನೀ ವರ ನೀಡದಿದ್ದರೆ ಪಾಪಿಯಾದ ನನ್ನ ತಲೆಯನ್ನೇ ಕತ್ತರಿಸಿ ಅಗ್ನಿಯಲ್ಲಿ ನಿನಗರ್ಪಿಸುತ್ತೇನೆ.'

ಭಕ್ತಾನುಗ್ರಹಕಾರಕನಾದ ಶಿವ ಹೇಳಿದ, 'ಹರಿಭಕ್ತ, ಹರಿದಾಸ, ಪರಮವೈಷ್ಣವ ಚಿರಾಯುಷಿ ಗುಣಶಾಲಿ ಸದಾ ಸ್ಥಿರಯೌವನ ಉಳ್ಳವ ಜ್ಞಾನಿ ಪರಮಸುಂದರ ಗುರುಭಕ್ತ ಮತ್ತು ಜಿತೇಂದ್ರಿಯನಾದ ಒಬ್ಬ ಮಗನನ್ನು ನೀ ಪಡೆಯುವಿ.' ಹೀಗೆ ಹೇಳಿ ಶಿವ ತನ್ನ ಲೋಕಕ್ಕೆ ತೆರಳಿದ.

ಗಂಧರ್ವರಾಜ ಸಂತುಷ್ಟನಾಗಿ ತನ್ನ ಮನೆಗೆ ಬಂದ. ಇಷ್ಟಾರ್ಥ ಸಿದ್ಧಿಸಿತೆಂದರೆ ಮಾನವರೆಲ್ಲ ಸಂತುಷ್ಟರೆ ಆಗುವರು ತಾನೆ ?